# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 587

ಮಾನ್ಯ ಸದಸ್ಯರ ಹೆಸರು : ಶ್ರೀ ಆಯನೂರು ಮಂಜುನಾಥ್ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 21.02.2022

ಉತ್ತರಿಸಬೇಕಾದ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಷ್ಟ್ರೀಯ ಹೆಲ್ತ್ ಮಿಷನ್ ಹಾಗೂ ಹೊರಗುತ್ತಿಗೆ ನೌಕರರಿಗೆ ಸಂಬಂಧಿಸಿದಂತೆ ಶ್ರೀ ಶ್ರೀನಿವಾಸಚಾರಿ ಸಮಿತಿಯು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಯಾವಾಗ ಆ ವರದಿಯ ಅನುಷ್ಠಾನಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು; | ರಾಷ್ಟ್ರೀಯ ಹೆಲ್ತ್ ಮಿಷನ್ ಗುತ್ತಿಗೆ ಹಾಗೂ ಹೊರಗುತ್ತಿಗೆ ನೌಕರರ ಬೇಡಿಕೆಗಳ ಬಗ್ಗೆ ಶ್ರೀ ಶ್ರೀನಿವಾಸಚಾರಿ, ನಿವೃತ್ತ ಐ.ಎ.ಎಸ್ ಅಧಿಕಾರಿಯ ಅಧ್ಯಕ್ಷತೆಯಲ್ಲಿನ ಸಮಿತಿಯು ನೀಡಿರುವ ವರದಿಯಲ್ಲಿನ ಈ ಕೆಳಕಂಡ ಅಂಶಗಳ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿದೆ.<br>1. **ಇನ್ಶೂರೆನ್ಸ್ ಯೋಜನೆ:** ಆಯುಷ್ಮಾನ್ ಭಾರತ್ ಆರೋಗ್ಯ ಕರ್ನಾಟಕ ಯೋಜನೆಯನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಅಡಿಯಲ್ಲಿ ಅಳವಡಿಸಿಕೊಳ್ಳಲಾಗುತ್ತಿದೆ.<br>2. **ಸೇವಾ ಕೃಪಾಂಕ ಹಾಗೂ ವಯೋಮಿತಿ ಸಡಿಲಿಕೆ ಸೌಲಭ್ಯ:** ವಿಶೇಷ ನೇಮಕಾತಿ ಅಡಿಯಲ್ಲಿ ಸೇವಾ ಕೃಪಾಂಕ ಹಾಗೂ ವಯೋಮಿತಿ ಸಡಿಲಿಕೆ ಸೌಲಭ್ಯವನ್ನು ರಾಷ್ಟ್ರೀಯ ಆರೋಗ್ಯ ಅಭಿಯಾನದಡಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೂ ಸಹ ಕಲ್ಪಿಸಲಾಗಿದೆ.<br>3. **ವರ್ಗಾವಣೆ:** ಕಾನೂನು ಇಲಾಖೆಯ ಅಭಿಪ್ರಾಯದಂತೆ ರಾಷ್ಟ್ರೀಯ ಆರೋಗ್ಯ ಅಭಿಯಾನದ ಅಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರನ್ನು ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಅಭಿಯಾನದ ಅನುಷ್ಠಾನಕ್ಕೆ ಪಡೆದಿದ್ದು, ಅಭಿಯಾನ ಮುಕ್ತಾಯವಾದರೆ ಇವರ ನೇಮಕಾತಿಯು ಮುಕ್ತಾಯವಾಗುತ್ತದೆ ಹಾಗೂ ಸದರಿ ಸಿಬ್ಬಂದಿಗಳನ್ನು ಜಿಲ್ಲೆಗಳ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಘಗಳಿಂದ ನೇಮಿಸಿಕೊಳ್ಳಲಾಗುತ್ತದೆ. |

....2

| | | |
|---|---|---|
| | | 4. **ವಿಶೇಷ ಸೇವಾ ಭತ್ಯೆ;** ಆರೋಗ್ಯ ಇಲಾಖೆಯಲ್ಲಿ ವಿಶೇಷ ಸೇವಾ ಭತ್ಯೆಯನ್ನು ನೀಡುತ್ತಿರುವ ಹುದ್ದೆಗಳನ್ನು ಪರಿಗಣಿಸಿ ಸಮಾನಾಂತರವಾಗಿರುವ ಹುದ್ದೆಗಳಿಗೆ ವಿಶೇಷ ಭತ್ಯೆಗಳನ್ನು 2022-23ನೇ ಸಾಲಿನ ಪಿ.ಐ.ಪಿ(Programme Implementation Procedure)ಯಲ್ಲಿ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗುವುದು.<br><br>ಉಳಿದಂತೆ ರಾಷ್ಟ್ರೀಯ ಆರೋಗ್ಯ ಅಭಿಯಾನದಡಿ ಕರ್ತವ್ಯ ನಿರ್ವಹಿಸುತ್ತಿರುವ ಗುತ್ತಿಗೆ ಸಿಬ್ಬಂದಿಗಳು ವೇತನ ಹಾಗೂ ಶೇ. 5 % ರಷ್ಟು ವಾರ್ಷಿಕ ಹೆಚ್ಚುವರಿ ಮೊತ್ತವನ್ನು ಪಡೆಯುತ್ತಿದ್ದು, ಅವರು ಪ್ರಸ್ತುತ ಪಡೆಯುತ್ತಿರುವ ವೇತನಕ್ಕೆ (Remuneration) ಹೆಚ್ಚುವರಿಯಾಗಿ ಶೇ. 15 % ರಷ್ಟು ಹೆಚ್ಚಳವನ್ನು ಮಾಡುವ ಬಗ್ಗೆ ಸ್ವೀಕೃತವಾದ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಶ್ರೀ ಶ್ರೀನಿವಾಸಚಾರಿಯ ವರದಿಯ ಕಡತ ಮಂಡಿಸುವಂತೆ ಹಿಂದಿನ ಮುಖ್ಯಮಂತ್ರಿಗಳು ಹಾಗೂ ಈಗಿನ ಮುಖ್ಯಮಂತ್ರಿಗಳು ಆದೇಶಿಸಿದ್ದಾರೆಯೇ;<br>ಯಾವ ದಿನಾಂಕದಂದು ಆದೇಶಿಸಿದ್ದಾರೆ; | ಮಾನ್ಯ ಮುಖ್ಯ ಮಂತ್ರಿಯವರಾದ ಶ್ರೀ ಯಡಿಯೂರಪ್ಪರವರು ದಿನಾಂಕ:12.06.2021 ರಂದು ಹಾಗೂ ಈಗಿನ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿರವರು ದಿನಾಂಕ:07.08.2021ರಂದು ಆದೇಶಿಸಿದ್ದಾರೆ. |
| ಇ) | ಇಬ್ಬರ ಮುಖ್ಯಮಂತ್ರಿಗಳ ಆದೇಶದ ಅನ್ವಯ ಇಲಾಖೆ ಕೈಗೊಂಡಿರುವ ಕ್ರಮದ ಪೂರ್ಣವಾದ ವಿವರವಾದ ಮಾಹಿತಿ ನೀಡುವುದು ಇಲ್ಲವಾದಲ್ಲಿ ಕಾರಣಗಳೇನು; | ಸರ್ಕಾರದ ಪರಿಶೀಲನೆಯಲ್ಲಿದೆ. |

....3

| | | |
|---|---|---|
| ಈ) | ಸದರಿ ವರದಿಯ ಅನುಷ್ಠಾನಕ್ಕೆ ಆಗ್ರಹಿಸಿ ನೌಕರರ ಸಂಘ ನೀಡಿರುವ ಮುಷ್ಕರದ ನೋಟಿಸ್ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಹೌದು.<br><br>ಶ್ರೀ ಶ್ರೀನಿವಾಸಚಾರಿ, ನಿವೃತ್ತ ಐ.ಎ.ಎಸ್ ಅಧಿಕಾರಿರವರ ಅಧ್ಯಕ್ಷತೆಯ ಸಮಿತಿಯು ನೀಡಿರುವ ಶಿಫಾರಸುಗಳನ್ವಯ ಉಪ ಪ್ರಶ್ನೆ (ಅ)ರಂತೆ ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: ಆಕುಕ 07 ಎಸ್.ಟಿ.ಕ್ಯೂ 2022**

**(ಡಾ|| ಕೆ.ಸುಧಾಕರ್)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು